ಸದನದಲ್ಲಿ ಉತ್ತರಿಸುವ

**ಕರ್ನಾಟಕ ವಿಧಾನ ಪರಿಷತ್ತು**

ನೂರ ಮೂವತ್ತೆಂಟನೆಯ ಅಧಿವೇಶನ

ಶುಕ್ರವಾರ, ದಿನಾಂಕ : 26ನೇ ಜುಲೈ, 2019

ಐ.ಎಂ.ಎ. ಸಂಸ್ಥೆಯು ಜನರಿಗೆ ವಂಚಿಸಿರುವ ಕುರಿತು

ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) -

148 (748) ಗೃಹ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ಐ.ಎಂ.ಎ. ಸಂಸ್ಥೆಯು ಯಾವ ವರ್ಷದಲ್ಲಿ ಆರಂಭವಾಯಿತು ;

(ಆ) ಈ ಪ್ರಕರಣದ ಹಾಲಿ ತನಿಖೆಯ ಪ್ರಕಾರ ಎಷ್ಟು ಜನ ಠೇವಣಿದಾರರು ತಮ್ಮ ದೂರುಗಳನ್ನು ದಾಖಲಿಸಿದ್ದಾರೆ ಮತ್ತು ಅವರು ಪಾವತಿಸಿರುವ ಒಟ್ಟು ಹಣವೆಷ್ಟು;

(ಇ) ಈ ಹಗರಣದಲ್ಲಿ ಭಾಗಿಯಾಗಿರುವ ಆರೋಪಿಗಳ ಸಂಖ್ಯೆ ಎಷ್ಟು ಮತ್ತು ಅದರಲ್ಲಿ ಎಷ್ಟು ಜನರನ್ನು ಬಂಧಿಸಲಾಗಿದೆ ;

(ಈ) ಈ ಹಗರಣಕ್ಕೆ ಸಂಬಂಧಿಸಿದಂತೆ ಈವರೆಗೆ ಜಪ್ತಿ ಮಾಡಲಾಗಿರುವ ಒಟ್ಟು ಆಸ್ತಿಯ ಮೊತ್ತವೆಷ್ಟು ;

(ಉ) ಈ ಹಗರಣದ ಮುಖ್ಯ ಸೂತ್ರದಾರಿಯನ್ನು ದೇಶಕ್ಕೆ ಮರಳಿ ಕರೆತರಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು ?